## ಕರ್ನಾಟಕ ವಿಧಾನ ಪರಿಷತ್ತು

1. ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 980(1161)
2. ಸದಸ್ಯರ ಹೆಸರು : ಶ್ರೀ ಅರುಣ ಶಹಾಪುರ (ಶಿಕ್ಷಕರ ಕ್ಷೇತ್ರ)
3. ಉತ್ತರಿಸಬೇಕಾದ ದಿನಾಂಕ : 07/03/2022
4. ಉತ್ತರಿಸುವ ಸಚಿವರು : ಪ್ರಾಥಮಿಕ ಮತ್ತು ಪ್ರೌಢ ಶಿಕ್ಷಣ ಹಾಗೂ ಸಕಾಲ ಸಚಿವರು

| ಕ್ರ ಸಂ | ಪ್ರಶ್ನೆ | ಉತ್ತರ |
|---|---|---|
| ಅ | ಭಾಷಿಕ ಅಲ್ಪ ಸಂಖ್ಯಾತ ಶಾಲಾ ಕಾಲೇಜುಗಳಲ್ಲಿ ಖಾಲಿ ಹುದ್ದೆಗಳನ್ನು ಮೀಸಲಾತಿ ರಹಿತವಾಗಿ ಭರ್ತಿ ಮಾಡುವ ಪ್ರಸ್ತಾವನೆಯನ್ನು ಸಲ್ಲಿಸುವಂತೆ ಇಲಾಖೆಯು ಸಂಬಂಧಿಸಿದ ಆಯುಕ್ತಾಲಯಗಳಿಗೆ ಪತ್ರ ಬರೆಯಲ್ಲಾಗಿದೆಯೇ; ಬರೆದಿದ್ದಲ್ಲಿ ದಿನಾಂಕದೊಂದಿಗೆ ಮಾಹಿತಿ ನೀಡುವುದು; | ಸರ್ಕಾರದ ಅಧಿಸೂಚನೆ ಸಂಖ್ಯೆ: ಇಡಿ 61 ಎಸ್‌ಎಂಸಿ 2009 ದಿನಾಂಕ: 03/09/2010 ರಲ್ಲಿ ಭಾಷಾ ಅಲ್ಪಸಂಖ್ಯಾತರು ನಡೆಸುತ್ತಿರುವ ಶಿಕ್ಷಣ ಸಂಸ್ಥೆಗಳೆಂದು ಘೋಷಿಸುವ ' ಸಂದರ್ಭದಲ್ಲಿ ರೋಸ್ಟರ್ ಪದ್ಧತಿ ಪಾಲಿಸುವ ಷರತ್ತನ್ನು ವಿಧಿಸುವುದು ಎಂದು ಸೂಚಿಸಲಾಗಿದೆ.<br>ಆದರೆ ಭಾಷಾ ಅಲ್ಪಸಂಖ್ಯಾತ ಶಾಲೆಗಳಲ್ಲಿ ಮೀಸಲಾತಿ ಪಾಲಿಸುವ ಬಗ್ಗೆ ಫ್ರೆಂಡ್ಸ್ ಕಲ್ಚರಲ್ ಎಜ್ಯುಕೇಷನ್ ಟ್ರಸ್ಟ್, ಬೆಂಗಳೂರು ಇವರು ಸರ್ಕಾರದ ಅಧಿಸೂಚನೆ ಸಂಖ್ಯೆ: ಇಡಿ 61 ಎಸ್‌ಎಂಸಿ 2009, ದಿನಾಂಕ: 03/09/2010 ನ್ನು ರದ್ದುಪಡಿಸುವಂತೆ ಕೋರಿ ಮಾನ್ಯ ಉಚ್ಚ ಕರ್ನಾಟಕ ಉಚ್ಚ ನ್ಯಾಯಾಲಯ, ಬೆಂಗಳೂರು ಇಲ್ಲಿ ದಾಖಲಿಸಿದ್ದ ರಿಟ್ ಅರ್ಜಿ ಸಂಖ್ಯೆ: 9744/2012 ರಲ್ಲಿ ದಿ:25/10/2013 ರ ಆದೇಶದಲ್ಲಿ ಮೀಸಲಾತಿ ಪಾಲಿಸಬೇಕೆಂಬ ಸರ್ಕಾರದ ಷರತ್ತನ್ನು ರದ್ದುಪಡಿಸಿ ಆದೇಶಿಸಿದೆ.<br>ಅದರಂತೆ ಸರ್ಕಾರದ ಪತ್ರ ಸಂಖ್ಯೆ: ಇಡಿ 33 ಎಸ್‌ಎಂಸಿ 2012, ದಿನಾಂಕ: 12/07/2021 ರಲ್ಲಿ ಮಾನ್ಯ ಉಚ್ಚ ನ್ಯಾಯಾಲಯದ ಆದೇಶವನ್ನು ಪಾಲನೆ ಮಾಡಲು ಕೂಡಲೇ ಕ್ರಮವಹಿಸುವಂತೆ ನಿರ್ದೇಶಿಸಲಾಗಿದೆ. |
| ಆ | ಈ ಪತ್ರಕ್ಕೆ ಸಂಬಂಧಿಸಿದಂತೆ ಎಲ್ಲಾ ಜಿಲ್ಲೆಗಳ ಉಪ ನಿರ್ದೇಶಕರು, ಸಾರ್ವಜನಿಕ ಶಿಕ್ಷಣ ಇಲಾಖೆ ಇವರ ಪ್ರಸ್ತಾವನೆಗಳನ್ನು ಸಿದ್ದಪಡಿಸಿ ಸರ್ಕಾರಕ್ಕೆ ಅಥವಾ ಸಂಬಂಧಿಸಿದ ಆಯುಕ್ತಾಲಯಗಳಿಗೆ ಸಲ್ಲಿಸಿದ್ದಾರೆಯೇ ; ಸಲ್ಲಿಸಿದ್ದಲ್ಲಿ ಎಷ್ಟು ಪ್ರಸ್ತಾವನೆಗಳನ್ನು ಸಲ್ಲಿಸಲಾಗಿದೆ ; (ಪ್ರಸ್ತಾವನೆಯ ವಿವರಗಳನ್ನು ಒದಗಿಸುವುದು) | ಉಪ ನಿರ್ದೇಶಕರುಗಳು, ಸಾರ್ವಜನಿಕ ಶಿಕ್ಷಣ ಇಲಾಖೆಗಳಿಂದ ಇಂತಹ ಯಾವುದೇ ಪ್ರಸ್ತಾವನೆಗಳು ಸರ್ಕಾರಕ್ಕೆ ಅಥವಾ ಆಯುಕ್ತಾಲಯಕ್ಕೆ ಸಲ್ಲಿಕೆಯಾಗಿರುವುದಿಲ್ಲ. |

| | | |
|---|---|---|
| ಇ | ಯಾವುದೇ ಪ್ರಸ್ತಾವನೆಗಳನ್ನು ಸಲ್ಲಿಸದೇ ಇದ್ದಲ್ಲಿ ಸಲ್ಲಿಸದಿರಲು ಕಾರಣವೇನು; ಈ ವಿಷಯದಲ್ಲಿ ವಿಳಂಬ ನೀತಿ ಅನುಸರಿಸುತ್ತಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ ; ಬಂದಿದ್ದಲ್ಲಿ, ಇದಕ್ಕೆ ಕಾರಣಗಳೇನು ವಿವರಣೆ ಒದಗಿಸುವುದು; | ಸಂಬಂಧಿಸಿದ ಸಂಸ್ಥೆಗಳ ಆಡಳಿತ ಮಂಡಳಿಯಿಂದ ಯಾವುದೇ ಪ್ರಸ್ತಾವನೆಯು ಸ್ವೀಕೃತವಾಗಿರುವುದಿಲ್ಲ. ಸ್ವೀಕೃತವಾದಲ್ಲಿ ಪರಿಶೀಲಿಸಲಾಗುವುದು. |
| ಈ | ತ್ವರಿತವಾಗಿ ಈ ಹುದ್ದೆಗಳನ್ನು ಭರ್ತಿ ಮಾಡಿಕೊಳ್ಳಲು ಸರ್ಕಾರ ಕ್ರಮವಹಿಸುವುದೇ? | ಸರ್ಕಾರವು ದಿನಾಂಕ: 31/12/2015 ರವರೆಗೆ ನಿಧನ, ನಿವೃತ್ತಿ, ರಾಜೀನಾಮೆ ಹಾಗೂ ಇತ್ಯಾದಿ ಕಾರಣಗಳಿಂದ ತೆರವಾದ ಪೂರ್ಣ ಕಾರ್ಯಭಾರ ಹೊಂದಿರುವ ಅರ್ಹ ಹುದ್ದೆಗಳಿಗೆ ಅನುಮತಿಸಿದೆ.<br><br>ಆಯುಕ್ತಾಲಯಗಳಿಂದ ಪ್ರಸ್ತಾವನೆಯು ಸ್ವೀಕೃತವಾದಲ್ಲಿ ನಿಯಮಾನುಸಾರ ಪರಿಶೀಲಿಸಲಾಗುವುದು. |

**ಸಂಖ್ಯೆ: ಇಪಿ 17 ಪಿಡಿಬಿ 2022**

(ಬಿ.ಸಿ. ನಾಗೇಶ್)

ಪ್ರಾಥಮಿಕ ಮತ್ತು ಪ್ರೌಢ ಶಿಕ್ಷಣ ಹಾಗೂ

ಸಕಾಲ ಸಚಿವರು